ಒಂದಾಣೆ ಮಾಲೆ 328

ಹರಿದಾಸ ಪಾವಂಜೆ ಲಕ್ಷ್ಮೀನಾರ್ಣಪ್ಪಯ್ಯನವರ

# ಭಜನಾ ಗೀತಗಳು (ಭಾಗ೪)



ದಿ॥ ಹರಿದಾಸ ಪಾವಂಜೆ ಲಕ್ಷ್ಮೀನಾರ್ಣಪ್ಪಯ್ಯನವರು.

ಸಂಗ್ರಾಹಕರು: ಶ್ರೀ। ಬೆಳ್ಳೆ ಭುಜಂಗ ರಾವ್, ಬಿ. ಎ.,

1961 ಬೆಲೆ: ಆಣೆ ೧.

ಒಂದಾಣೆ ಮಾಲೆ — ಮಂಗಳೂರು.

[ಹೊದಿಕೆಯ 3ನೇ ಪುಟದಿಂದ ಮುಂದುವರಿದುದು]

ಧರ್ಮಾರ್ಣವ | ಸಂತಾಪಕ್ಕೊಳಗಾಗಿ ಭ್ರಾಂತಿಪಟ್ಟಿಹರು || ಇಂ || ೧ ||
ಜೀವಿಸಿ ಮೃಗದಂತೆ | ಸಾವನು ಬಗೆಯದೆ | ಕೇವಲ ತಾಮಸ ಯಾವ
ಜ್ಜೀವವವು || ಇಂ || ೨ || ಸರಕಾರದ ಭಯ ಸರ್ವರೀಗಿದ್ದರು | ಸರಿ
ಯಾಗಿ ನಡೆಯದೆ | ಬರಿದೆ ಬಲಳುವರು || ಇಂ || ೩ || ಬಡವರ
ಬಾಯನು | ಹೊಡದು ತಂದು ತನ್ನ | ಮಡದಿಮಕ್ಕಳಿಗುಣಬಡಿಸಿ ಮೆರೆವ
ರೈ || ಇಂಥ || ೪ || ಲಕ್ಷ್ಮೀನಾರಾಯಣನ ಲಕ್ಷಣಾಂಕಿತರನ್ನು |
ಲಕ್ಷ್ಯಕ್ಕೆ ತಾರದ ಕುಕ್ಷಿಂಭರರು || ಇಂ || ೫ ||

|| ರಾಗ: ಶಂಕರಾಭರಣ. ಅಷ್ಟತಾಳ ||

ಮಂಗಲಂ ಶ್ರೀ ಪಂಚದುರ್ಗೆಗೆ | ಜಯ | ಮಂಗಳಾರತಿಯೆತ್ತಿ |
ಶ್ರೀ ಮಹೇಶ್ವರಿಗೆ | ಮಂಗಲಂ ಶ್ರೀ ಪಂಚದುರ್ಗೆಗೆ || ಪಲ್ಲ || ಶಂಖ
ಚಕ್ರ ಶೂಲಾಂಕುಶಪಾಣಿಗೆ | ಶಂಕರನಂಕಾಲಂಕರಿಗೇ | ಕುಂಕುಮ
ಬೊಟ್ಟು ಕಸ್ತೂರಿ ಲಲಾಟೆಗೆ | ಪಂಕಜಗಂಧಿ ಶ್ರೀ ಪಾರ್ವತಿಗೆ || ಮಂಗ
ಲಂ || ೧ || ಕೋಕಿಲಗಾನೆಗೆ | ಶೋಕಪಲೋಚೆಗೆ ಶ್ರೀಕಂಠನರ್ಧಾಂಗಿ
ಶ್ರೀ ಗೌರಿಗೆ | ಏಕದಂತನ ಜನನಿಗೆ ಜಗದಂಬೆಗೆ | ಲೋಕನಾಯಕಿ ಶ್ರೀ
ಮಹಕಾಳಿಗೆ || ಮಂಗಲಂ || ೨ || ಕಂಜದಳಾಕ್ಷಿಗೆ | ಕಲಧೌತ
ಗಾತ್ರೆಗೆ | ಕುಂಜರಗಮನೆ ಕುಧರಜಾತೆಗೆ | ಮಂಜೀರನೂಪುರ ರಣಿತ
ಪದಾಬ್ಜೆಗೆ | ನಂಜುಂಡನ ಮನ ಮಂಜುಳೆಗೆ || ಮಂಗಲಂ || ೩ ||
ಅಂಗಜರೂಪೆಗೆ ಮಂಗಲದಾತೆಗೆ | ಭೃಂಗಕುಂತಳೆ ಸರ್ವಮಂಗಲೆಗೆ |
ಭಂಗಾರ ಮಕುಟೋತ್ತಮಾಂಗದಿ ಧರಿಸಿದ | ಸಂಗೀತಲೋಲೆಗೆ ಸರ್ವಾ
ಣಿಗೆ || ಮಂಗಲಂ || ೪ || ರೂಢಿಗಧಿಕ ಬಪ್ಪನಾಡಿಗೊಡತಿಯಾಗಿ |
ಮೂಡಿ ತೋರಿದ ಶ್ರೀ ಮುಕಾಂಬಿಕೆಗೆ | ಕ್ರೀಡಾವತಾರ ಲಕ್ಷ್ಮೀನಾರಾ
ಯಣ ಸೊಸೆ | ಬೇಡಿದಿಷ್ಟವನೀವ ಸರ್ವೇಶೆಗೆ || ಮಂಗಲಂ || ೫ ||



## ಹರಿದಾಸ ಪಾವಂಜೆ ಲಕ್ಷ್ಮೀನಾರ್ಣಪ್ಪಯ್ಯನವರ

# ಭಜನಾಗೀತಗಳು

## (ಭಾಗ ೪)

---

|| ರಾಗ: ರೂಪಕ ತಾಳ ||

ನಮೋ ನಮಸ್ತೇ | ಉಮಾತನಯ ಕುಮಾರಾಗ್ರಜ | ನಮೋ ನಮಸ್ತೇ || ಪಲ್ಲ || ಅಮೋಘ ಶಮ | ದಮಾದಿ ಗುಣ | ಸಮೂಹ ಗತ | ವಿಮೋಹ ಸದ || ನಮೋ || ಅ. ಪ. || ಭಾರತವ | ಮಹಾ-ಭಾರತವ | ಬಾದರಾಯಣನು | ಪೇಳಿದಂತೆ ಬರೆದೆ | ಭಾರತವ | ಮಾರಜ ಭ್ರಮೆಯ | ದೂರಗೈದ ಸುವಿ | ಚಾರ ಧೀರ ಸುರ | ವಾರ ವಿನುತ ಪಾದ || ನಮೋ || ೧ || ವಂದಿಸುವೆ | ನಾ-ವಂದಿಸುವೆ | ವೃಂದಾರಕೇಂದ್ರ ಯೋಗೀಂದ್ರ ತವಚರಣಕೆ | ವಂದಿಸುವೆ | ವಂದಾರು ಮಂದಾರ | ಚಂದನ ಚರ್ಚಿತ | ಚಂದ್ರಚೂಡ ಮನೋನಂದಮೂರುತಿಯೆ || ನಮೋ || ೨ || ಸುಕ್ಷೇಮದ ಸುಜನ | ಪಕ್ಷ ಪಾವನ ಮುಮುಕ್ಷು ಜನ ಪ್ರಿಯ | ಸುಕ್ಷೇಮದ | ಲಕ್ಷ್ಮೀನಾರಾಯಣ | ಲಕ್ಷ್ಮಿತಾತ್ಮನೆ ವಿ | ಪಕ್ಷ ರಕ್ಷೋಗಣ | ಶಿಕ್ಷ ಸೂಕ್ಷ್ಮಮತೆ || ನಮೋ || ೩ ||

|| ರಾಗ: ಭಜನ. ಯೇಕತಾಳ ||

ಭಾರತಿ ಭರತನ ರಮಣಿ | ಶಿರ | ಬಾಗುವೆ ತ್ರಿಜಗಜ್ಜನನಿ | ಭಾರತಿ ಭಾಗವತಾರ್ಥ ಬೋಧಿನೀ | ಶಾರದೇಂದು ನಿಭವದನೀ | ಭಾರತಿ || ೧ || ಹರಿ ಗುರುಗಳಲಿ ಸದ್ಭಕ್ತಿ | ದೃಢ | ಕರುಣಿಸು | ಸರಸಿಜನೇತ್ರಿ | ಗಿರೀಶಾದಿ ಸರ್ವ | ಸುರೌಘ ಪ್ರಣೇತ್ರಿ | ಶರಣು ಶರಣು ಸುಪವಿತ್ರಿ || ಭಾರತಿ || ೨ || ಕಾಳಿ ದ್ರೌಪದಿ ಸನಾಮೆ ನಮ್ಮ | ಪಾಲಿಸು ಭೀಮ ಪ್ರೇಮೆ | ಶ್ರೀಲಕ್ಷ್ಮೀನಾರಾಯಣನ ಭೃತ್ಯೇ | ಕಾಲತ್ರಯಕೃತಕೃತ್ಯೈ || ಭಾರತಿ || ೪ ||

॥ ರಾಗ: ಪರಾಳಿ. ಆದಿತಾಳ ॥

ಮಹಾಮಾಯೆ ಗೌರಿ । ಮಾಹೇಶ್ವರಿ । ಮಹಾಮಾಯೆ ಗೌರೀ ಮಹಾದೇವ ಮನೋಹಾರಿ । ಶಂಕರಿ । ಮಹಾಪಾಪ ಧ್ವಂಸಕಾರಿ ಶ್ರೀಕರಿ ಮಾಂ ಪಾಹಿ । ಪಾಹಿ ಶೌರಿ ಸೋದರಿ ॥ ಅ. ಪ. ॥ ಕಾಮಕೋಟಿ ಸುಂದರಿ ಶುಭಕರಿ ॥ ಕರಿ ಕುಂಭಪಯೋಧರಿ । ಕಾಮಿತಪ್ರದೆ ಕಂಬು ಕಂಧರಿ । ಹೇಮಾಲಂಕರಿ ಹೈಮವತಿ ಕುಮರಿ ॥ ಮ ॥ ೧ ॥ ಭಾನು ಕೋಟಿ ಭಾಸ್ಕರಿ ಭವಹರಿ । ಭಜಕಾಮೃತಲಹರಿ । ಸ್ಥಾಣುವಲ್ಲಭೆ ದನುಜಸಂಹರಿ ಜ್ಞಾನಾಗೋಚರಿ ಜಗತ್ರಯೇಶ್ವರಿ ॥ ಮ ॥ ೨ ॥ ಪೂರ್ವದೇವ ಭೀಕರಿ ಭ್ರಾಮರಿ । ಪುಳಿನಾಖ್ಯಪುರೇಶ್ವರಿ । ಸರ್ವ ಲಕ್ಷ್ಮೀ ನಾರಾಯಣೇಶ್ವರಿ ಶರ್ವಸಹಚರಿ ಶಶಾಂಕಶೇಖರಿ ॥ ಮ ॥ ೩ ॥

॥ ರಾಗ: ತೋಡಿ. ಆದಿತಾಳ ॥

ರಾಧಾಕೃಷ್ಣ ರಾಧಾಪ್ರೇಮದ । ಸುಪ್ರಸೀದ ಶ್ರೀಧಜಯ ॥ ರಾಧಾ ವಕ್ಷಸ್ಥಲ ಕೃತಭೂಷಣ । ರಾಧಾ ನಯನಾಂಬೋರುಹಪೂಷಣ । ರಾಧಾ ಶ್ಲೇಷಣ ತೋಷಣ ರಾಕ್ಷಸ ಭೀಷಣಾಘ । ದೂಷಣ ವಿಶೇಷಣ ॥ ॥ ರಾಧಾ ॥ ೧ ॥ ರಾಧಾ ರಾಸಾಕ್ರೀಡನಸಕ್ತ । ರಾಧಾ ಮನಸಂಬೋಧನ ಸೂಕ್ತ । ರಾಧಾರಮಣ । ರಾಧಾರ್ಕಿಹನ । ರಾಧೇಂಗಿತ ಪಾರಂಗತ ಸುಸ್ಥಿತ ॥ ರಾ ॥ ೨ ॥ ರಾಧಾ ಲಕ್ಷ್ಮೀನಾರಾಯಣ ಜಯ । ರಾಧಾರಾಧಿತ ಪದಸು ಶ್ರೀಯ ರಾಧಾಕೃತ ಪರಿಚರ್ಯಾಂಸೋನ್ನತ । ವೀರ್ಯವರ್ಯ ಸೂರ್ಯಾಂತರ್ಯಗ ॥ ರಾಧಾ ॥ ೩ ॥

॥ ರಾಗ: ಆದಿತಾಳ ॥

ಸದಾನಂದಂ ಶಿವಶಿವ ಆನಂದಾನಂದಾನಂದಂ ॥ ಅಪ್ಪ ಅಣ್ಣ ನೆಂದು ಕರೆದರೆ ನಮಗಿಹ । ತಪ್ಪುಗಳನು ಜಗದಪ್ಪನಿ । ಗೊಪ್ಪಿಸೆವಾ ನಂದಾನಂದಾನಂದಂ ॥ ೧ ॥ ತತ್ವವರಿತು ಹರಿ ಭೃತ್ಯರೊಳಾಡುತ । ಚಿತ್ತನ ಸಂತತೀ । ಕಾತ್ಮನೊಳಿಡುವಂಥಾನಂದಾನಂದಂ ॥ ೨ ॥ ಭೂರಿ ಸಂಸಾರಕೆ । ಸೇರದೆ ನಿತ್ಯದಿ ! ಧೀರ ಲಕ್ಷ್ಮೀನಾರಾಯಣನೆಂಬುವದಾನಂದಾ ನಂದಂ ॥ ೩ ॥

|| ರಾಗ| ಧನಾಶಿರಿ. ಆದಿತಾಳ ||

ದಂಡಿಸಬೇಡೈ ದಯದೋರೈ ಕರ | ದಂಡದಳಾಂಬಕನೆ | ಚಂಡೀಶ ವಿನುತ ಬ್ರಂ | ಹ್ಮಾಂಡ ಪಾಲ ಮಾ | ರ್ತಾಂಡ ಮಂಡಲಹ ಶುಂಡಾಲ ವರದ || ದಂಡಿ || ಕ್ಷೇಮದಿ ಶ್ರೀಹರಿ | ನಾಮವ ವರ್ಣಿಸೆ | ನೇಮಾನುಷ್ಠಾನದೊಳಿರಲು | ನಾಮಾಡಿದ ನಾನಾವಿಧ ಪಾಪದ | ತಾಮಸಗೊಳಿಸುವ ಕಾಮಕ್ರೋಧಗಳಿಂ || ದಂಡಿ || ೧ || ಗಿರ್ವಾಣ ನುಡಿಯೊಳಿರ್ವರ್ಥಗಳನು ಸರ್ವಾರ್ಥವೆಂದು ನಾ ತಿಳಿಸಿರಲು | ಪೂರ್ವಾರ್ಜಿತಗಳೆ | ದುರ್ವರದಿಂದೆನ್ನಯ | ನಿರ್ವಾಹವಿಲ್ಲ | ದುರ್ವ್ಯಸನಗಳಿಂ || ದಂಡಿ || ೨ || ಶಿಷ್ಟಾಚಾರದೊ | ಳಿಷ್ಟವಾಗಿ ಪರ | ಮೇಷ್ಠಿ ಜನಕ ಜಯಜಯವೆನಲು | ಭ್ರಷ್ಟಾಲೋಚನೆ | ಪುಟ್ಟಿಸಿ ಪಾಪದ ಬಟ್ಟೆಯ ಹೊದ್ದಿಪ | ದುಷ್ಟ ಸಂಗದಿಂ || ದಂಡಿ || ೩ || ನಾರಾಯಣ ನರಹರಿಯನ್ನುವ ವ್ಯಾ | ಪಾರವ ನಾಮಾಡುತ್ತಿರಲು | ಆರೋಹಣಾವರೋಹಣ ನಾದವಿ | ಕಾರಗೊಳಿಪ ಶಾರೀರಪ್ರಕೃತಿಯಿಂ || ದಂಡಿ || ೪ || ಆರ್ಕಾರಣರಿಪು ಗಳಸ್ಸೈ ಸರ್ವದೇ | ವರ್ಕಳ ಮಸ್ತಕಮಣಿ ನೀನ್ಸೈ | ತರ್ಕಾಗಮ್ಯ ಲಕ್ಷ್ಮೀನಾರಾಯಣ | ಅರ್ಕಾವಿಂಶ ಪ್ರಭ ಕಾರ್ಕಳಪುರವರ || ದಂಡಿ || ೫ ||

|| ರಾಗ: ಸುರುಟಿ. ರೂಪಕತಾಳ ||

ಧ್ಯಾನಿಸಿನ್ನು ಶ್ರೀನಿವಾಸ | ಶ್ರಿತಕಲ್ಪ ಭೂಜನ | ಧ್ಯಾನಿಸಿನ್ನು ಶ್ರೀನಿವಾಸನ || ಅನುಪಲ್ಲ || ನಖಮಣಿ ಶ್ರೇಣಿ ವಿರಾಜಿತ ನಳಿನ ಚರಣಯುಗಳನ | ಸುಕುಮಾರ ಕಮನೀಯಾಂಗನ | ಅಖಿಲ ಲೋಕಕ್ಷೇಮಧಾಮನ || ಧ್ಯಾ || ೧ || ಪಿತಾಂಬರಧರವರ ಜಿ | ಮೂತ ನೀಲವರ್ಣನ | ಶ್ರೀತರುಣಿ ಶುಭವಕ್ಷನ | ಶ್ವೇತವಾಹನ-ನೂತನ-ಖ್ಯಾತನ || ಧ್ಯಾ || ೨ || ಶಂಖಚಕ್ರಗಧಾ ಪುಷ್ಪ | ರಾಂಕ ಚತುರ್ಭುಜನ | ಪಂಕಜನಾಭನ ಕೌಸ್ತುಭಲಂಕೃತ ಶ್ರೀವನದೇವನ || ಧ್ಯಾ || ೩ || ಚಂದ್ರ ಸಹಸ್ರ ಸಮಾನನ | ಕುಂದಕುಟ್ಮಲರದನನ | ಸುಂದರಾರುಣಾಧರಾರ | ವಿಂದದಳಾಯತನಯನನ || ಧ್ಯಾ || ೪ || ಕನಕಕುಂಡಲ ಕರ್ಣಯುಗನ | ಮಣಿಖಚಿತ ಕಿರೀಟನ | ಗುಣನಿಧಿ ಲಕ್ಷ್ಮೀನಾರಾ | ಯಣನ ಸಂಕರ್ಷಣನ ಹೃದಿ || ಧ್ಯಾನಿಸಿನ್ನು || ೫ ||

॥ ರಾಗ:          ಆದಿತಾಳ ॥

ನಾನಾನಂತಪರಾಧಿ । ಯನ । ಗೇ ನಿಲವು ದೃಢ ಬುದ್ಧಿ । ನೀನೆ ಗತಿ ನಿನ್ನೊರತು ಕಾವರನು ಕಾಣೆನು ಕರುಣಾಂಬೋಧಿ ॥ ನಾ ॥ ಹಂದಿ ಯಂತೆ ತಿಂದು ಬೆಳೆದೆ ಯೆನ್ನ । ಮುಂದಣ ಗತಿಯನ್ನು ಮರೆತೆ । ಹಿಂದಿ ಲ್ಲವು ಮುಂದಿಲ್ಲವು ಲೋಕದಿ । ನಿಂದ್ಯಾಪಾತ್ರ ತಾನಾದೆ ॥ ನಾ ॥ ೧ ॥ ಮಾತ್ರಿತು ಯನಗಜ್ಞಾನ । ಯನ್ನ । ಚಿತ್ತದಿ ಕೊಡು ನಿನ್ನ ಧ್ಯಾನ । ನಿತ್ಯಾ ತವ ಚರಣ । ಭಕ್ತಿ ಜ್ಞಾನವ । ನ್ನಿತ್ತು ಕಾಯೊ ಸುತ್ರಾಣ ॥ ನಾ ॥ ೨ ॥ ಗತಿಯಾರಿಲ್ಲನ್ಯತ್ರ । ಶ್ರೀಪತಿಯೆ ಕಾಯೊ ಸುಚರಿತ್ರ । ಕ್ರತುಪಾಲ ಲಕ್ಷ್ಮೀ ನಾರಾಯಣ ಭಾ । ರತಿಪತಿನುತ ಸುರಮಿತ್ರ ॥ ನಾ ॥ ೩ ॥

॥ ರಾಗ: ಭೈರವಿ. ರೂಪಕತಾಳ ॥

ನಮೋ ನಮೋ ಕಾಲಭೈರವ । ಹರಿಯ ಚರಣ । ಸಮೀಪದೊಳು ಗಿದ್ದು ಮೆರೆವವ । ಸಮೀನಜ್ಞಾನ ಭಕ್ತಿ । ಸಮೂಹವ ಕಾವ ಲಕ್ಷ್ಮೀರಮ ಣನ ಕಾರ್ಯ ಮಂತ್ರಿಯು ಮಾಧವನ ಸಮಾನಬಲ ॥ ನಮೋ ॥ ಬೆಟ್ಟ ದೊಡೆಯ ಶ್ರೀನಿವಾಸನ । ಪಾದಕಮಲ । ಮುಟ್ಟಿ ಭಜಿಪ ವೈರಿಮರ್ಧನ । ಸೃಷ್ಟಿ ಮೂರರಲ್ಲಿ ಕೀರ್ತಿ । ಪಟ್ಟ ದಿಟ್ಟ ಧೀರ ಪರಮ । ನಿಷ್ಠ ಪುಷ್ಠ ತುಷ್ಟಿ ಪ್ರದ ಬ । ಲಿಷ್ಠ ಶ್ರೇಷ್ಠ ಭೂತಪತಿಯೆ ॥ ನ ॥ ೧ ॥ ಶ್ರೀನಿವಾಸನಾಜ್ಞೆ ಮೀರದೆ । ನಡಸುವದೆ ಪ್ರ1 ಧಾನ ಕಾರ್ಯ ನಿನ್ನದೆಂಬುದೆ । ತಾನು ಕಿಂಚಿ ದರಿತು ಸನ್ನಿ । ಧಾನವನ್ನೋಲೈಸಿ ಬಂದೆ । ದೀನಬಂಧು ಸುಗುಣಸಿಂಧು । ಮಾನ ತ್ರಾಣವಿತ್ತು ಸಲಹೊ ॥ ನ ॥ ೨ ॥ ಅಂತರಂಗದಲ್ಲಿ ಪ್ರಾರ್ಥನೆ । ಮಾಡಿದರೆ । ಸ್ವಂತ ಬಂಧು ಮಾಡು ರಕ್ಷಣೆ । ಅಂತ್ಯಕಾಲದಲ್ಲಿ ಹರಿಯ । ಚಿಂತನೆಗೆ ವಿಘ್ನ ಬಾರದಂತೆ । ಕಾವ ಮಹಾತೇಜೋವಂತ । ಹೊಂತಕಾರಿ ಸೂರಿ ॥ ನ ॥ ೩ ॥ ಕಾಲಕಾಲದಲ್ಲಿ ಭಕ್ತರ । ಪಾಲಿಸುವ ಚಂದ್ರಶೇಖರ । ಖೂಳಜನರ ಗರ್ವ ಮುರಿವ । ಶೂಲಪಾಣಿ ಸುಗುಣ ಶ್ರೇಣಿ । ಮೂಲ ಪತಿಯ ಪಾದಪದ್ಮ । ಮೂಲದಲ್ಲಿ ನಲಿವ ಚೆಲುವ ॥ ನ ॥ ೪ ॥ ಕೋರಿ ಕೊಳ್ಳದೆ ಭೂರಿ ಮಹಿಮೆಯ । ಭಕ್ತರಿಂಗಾ । ಧಾರವಾಗಿ ರಾಜಿಸಿರುವೆಯ । ಶೂರ ಲಕ್ಷ್ಮೀನಾರಾಯಣನ ಸೇರಿದಾ ನತರ್ಗೆ ಮಂ । ದಾರ ಮಹೋದಾರ ಗಂಭೀರ ಧೀರ ಚಾರುಚರಿತ ॥ ನ ॥ ೫ ॥

|| ರಾಗ: ಕಲ್ಯಾಣಿ. ಅಷ್ಟತಾಳ ||

ಕಾಲಭೈರವ ಸ್ವಾಮಿಯೆ | ಭಕ್ತಜನಾವಳಿಗೆ ಸುಪ್ರೇಮಿಯೆ | ಮೂಲೋಕದೊಳು ಹರಿ | ಲೀಲೆ ಕೊಂಡಾಡುವ ಶೀಲರಕಾವ ಕೃ | ಪಾಳುವೆ ಜಯ ಜಯ || ಕಾ || ಅ. ಪ. || ರುದ್ರನಾಯಕ ಹರಿಯ | ಪಾದ ಭಕ್ತಿ | ಮುದ್ರಾಂಕಿತ ನೀನೈಯ | ಬುದ್ಧಿಜ್ಞಾನ ಸಂ | ಸಿದ್ಧಿ ಸುತೆಮ್ಮನು | ಉದ್ಧರಿಸುವ ಸುಪ್ರ | ಸಿದ್ಧ ಮಹಿಮ ನಿನ್ನ | ಹೊಂದಿದೆನು ಶಾತೀರವು ಣನ ನಿ | ರುದ್ಧನಂಘ್ರಿ ಸರೋಜ ಸ್ಮರಣೆ ಸ | ವೃದ್ಧಿಯನು ನೀನಿತ್ತು ವಳ ಹೊರ | ಗಿದ್ದು ಕಾಯೋ ಸುಭದ್ರದಾಯಕ || ಕಾ || ೧ || ಕಾಮ ಕ್ರೋಧ ಮುಂತಾದ | ವೈರಿಜನ | ಸ್ತೋಮದಿಂ ಬಹಳ ಬಾಧಾ | ಶ್ರೀ ಮನೋರಮನ ಸು | ನಾಮಸ್ಮರಣೆಯನ್ನು ಪ್ರೇಮದಿಂದಿತ್ತು ಸು | ಕ್ಷೇಮ ದಿಂ ಪೊರೆಯೆಂದು | ವ್ಯೋಮಕೇಶನೆ | ಧೀಮಂತಾವರ | ಸೋಮಧರ ಸು | ತ್ರಾಮ ವಂದಿತ | ತಾಮರಸ ಸಖತೇಜ ಸುಜನರ | ಕಾಮಧೇನು ಮ | ನೋಮಯನೆ ಜಯ || ಕಾ || ೨ || ಲಕ್ಷ್ಮೀನಾರಾಯಣನ | ದಾಸಾರ್ಯ ಘಾ | ಲಾಕ್ಷ ಮಹೇಶನ ಸೂಕ್ಷ್ಮ ಸ್ಥೂಲದೊಳ್ಪ | ರೀಕ್ಷಕ ನಾಗಿ ವಿ | ಪಕ್ಷದವರನುರೆ ಶಿಕ್ಷಿಸಿ ಶಿಷ್ಟರ | ರಕ್ಷಿಸುವ ಸದಯಾರ್ದ್ರ ಹೃದಯ | ಮುಮುಕ್ಷುಪ್ರಿಯ ಗುರುವರ್ಯ ಲೋಕಾ | ಧ್ಯಕ್ಷ ದಕ್ಷ ಮಖಾಂತಕನೆ ಕರು | ಣೇಕ್ಷಣದಲ ನಿ | ರೀಕ್ಷಿಸೆಮ್ಮನು || ಕಾ || ೩ ||

## ಬಂಟ್ವಾಳ ಶ್ರೀ ವೆಂಕಟರಮಣ ದೇವರ ಸ್ತುತಿ

|| ರಾಗ: ತಾಳ: ||

ಶ್ರೀ ರಮಾಧವಾ | ಶ್ರಿತಜನ ಪಾಲಿತ | ಮಾರ ಕೋಟಿ ರೂಪಾ | ವಾರಿಧಿಶಯನ ಮು | ರಾರಿ ಕೇಶವ | ಶ್ರೀಮ | ನ್ನಾರಾಯಣ ನೀ | ರಜದಳಲೋಚನ || ಪ || ಮಾನುಷತ್ವವಾಂತ | ಸಮಯದಿ ಹೀನ ಭೋಗದ ಚಿಂತಾ | ನಾನು ನೀನೆಂಬಭಿ | ದಾಮನದಿ ಮನಸು | ನಿಧಾನ ವಿಲ್ಲದೆ | ಅನುಮಾನದಿಂದಿಹುದೈ || ಚಾಲ್ || ಏನು ಕಾರಣ | ಹೃದಯಾ ನಳಿನದೊಳು | ನೀ ನೆಲಸಿಕೊಂಡೀ ನರಯೋನಿಗೆ | ನೀನೆ ಬರಿಸಿಯುವ | ಮಾನ ಬಡಿಸುವದು | ಊನವಲ್ಲವೆ ಪದ | ದಾಣೆ ಸತ್ಯವಿದು || ಶ್ರೀ || || ೧ || ಬಾಲಕತನದೊಳಗೆ | ಕಾವ್ಯದ | ಶೀಲವಿತ್ತೇಯನಗೆ | ಕಾಳು

ಮಾಡದೆಯನ್ನ ಬಾಲಭಾಷಿತಂಗಳ | ಕೇಳ್ಳೈ ಶ್ರೀ ಲಕ್ಷ್ಮೀಲೋಲ ವೆಂಕಟೆ ರಾಯ || ಚಾಲ್ || ಕಾಲಕಾಲಪ್ರಿಯ | ಪಾಲಿಸೊಲಿದು ಕರು | ಣಾಲ ವಾಲನತ | ಪಾಲಶೀಲ ಮುನಿ | ಜಾಲ ವಂದ್ಯವನ | ಮಾಲಧಾರಿ ಜಗ | ಮೂಲ ಸ್ವರೂಪ ವಿ | ಶಾಲ ಗುಣಾರ್ಣವ || ಶ್ರೀ || ೨ || ಹಿಂದಾದುದ ನರಿಯೇ | ಇದರಿಂ | ಮುಂದಾಗುವದ ತಿಳಿಯೆ | ಹಿಂದುಮುಂದಿಲ್ಲದೆ | ಬಂಧನದೊಳು ಬಲು | ನೊಂದೆನ್ನೈ ನಿನಗಿದು | ಚಂದವೆ ಶ್ರೀಹರಿ || ಚಾಲ್ || ತಂದೆ ತಾಯಿ ಬಂಧುಬಾಂಧವ ಬಳಗ ನೀ | ನೆಂದು ನಿನ್ನಯ ಪದ | ದ್ವಂದವ ಭಜಿಪ | ನಂದ ಸುಜ್ಞಾನದಿಂ | ದೆಂದೆಂದಿಗು ಸುಖ | ದಿಂದಿರುವಂದದಿ ತಂದೆ ನೀ ಪಾಲಿಸು || ಶ್ರೀ || ೩ || ಧಾರುಣಿಗಧಿಕವಾದ ಮೆರೆವ ಕುಮಾರಧಾರಿ ತಟದ | ಚಾರು ನೇತ್ರಾವತಿ | ತೀರ ಪಕ್ಷಿಮಭಾ ಗ | ಸಾರಿ ತೋರುವ ವಟ | ಪುರದೊಳು ನೆಲಸಿಹ || ಚಾಲ್ || ವೀರವೆಂ ಕಟಪತಿ | ವಾರಿಜನಾಭ ಖರಾರಿ ತ್ರಿದಶಗಣ | ವಾರವಂದ್ಯ ಭಾಗೀರತಿ ಪಿತ | ದುರಿತಾರಿ ದೈತ್ಯಸಂಹಾರಿ ಶ್ರೀ ಲಕ್ಷ್ಮೀನಾರಾಯಣ ಹರಿ || ಶ್ರೀ || || ೪ ||

|| ರಾಗ: ಆನಂದ ಭೈರವಿ. ಆದಿತಾಳ ||

ಸರ್ವಸ್ವತಂತ್ರನು ಹರಿ | ನಿಜವಾದ ದಾರಿ || ಪಲ್ಲ || ಸರ್ವಜೀವ ಹೃದಯಾಕಾಶಗ ವಿಧಿ | ಸರ್ವಾದಿಸುರ ಕೈವಾರಿ || ಸರ್ವನಾಮಕ ಸ-ದೋದಿತ ಶೌರಿ ಸರ್ವವಿಭೂತಿ ವಿಹಾರಿ | ನಿಜವಾದ ದಾರಿ || ಸರ್ವ ||೧|| ಸತ್ವಾದಿ ಗುಣಪ್ರ | ವರ್ತನಕಾರಿ ಸು | ಹೃತ್ತಮದುರಿತಪಹಾರಿ || ತತ್ವೇಶ ನಿಚಯ | ಸ್ತುತ್ಯ ಮುರಾರಿ | ಸತ್ಯಾತ್ಮಕ ನಿರ್ವಿಕಾರಿ | ನಿಜವಾದ ದಾರಿ | ಸರ್ವ || ೨ || ಲಕ್ಷ್ಮೀನಾರಾಯಣ ನಿರ್ಗುಣ ಸುವಿ | ಲಕ್ಷಣ ದೀನೋದ್ಧಾರಿ | ಮೋಕ್ಷತ್ರಯ ಕಲಿಕಲುಶ ನಿವಾರಿ | ಸಾಕ್ಷಿರೂಪ ಗಿರಿಧಾರಿ || ನಿಜ || ೩ ||

|| ರಾಗ: ಆನಂದಭೈರವಿ. ಆದಿತಾಳ ||

ಪರಾತ್ಪರ ಪರಮ ಪಾ | ವನನೆ ಪರಾಕು ಫಣಿಶಯನಾ ಪಾಪಘ್ನ || ಪರಾತ್ಪರ || ಪಲ್ಲ || ಸುರಾಸುರಾರ್ಚಿತ ಪುರಾಣ ಪುರುಶೇಶ್ವರಾ ನಿಶಾಮಯ | ಮುರಾರಿ ಶ್ರೀಹರಿ || ೧.ಪ. || ನಯಾ-ವೀತ ಭಯಾ-ಪಾರ್ಥ

ಪ್ರಿಯಾ | ಸರ್ವನಿಯಾಮಕಚಿನ್ಮಯಾ | ದಯಾವಂತ | ಜಯಾ-ಕಾಂತ ಹಯಾಸ್ಯ-ಪಯೋಬ್ಧಿ-ಶಯಾನ-ವಿಯಾನ || ಪರಾತ್ಪರ ||೧|| ರಮಾ-ರಮಣ ನಮ-ಸ್ತೆ ನಿರುಪಮಾ | ಮಹಿಮ ಸುಮೇಧ ಸುರೋತ್ತಮ || ಮಮಾ-ಪರಾಧಕ್ಷಮಾ | ಕುರುವಿರಾಮ | ನಿಯಮ ಪದುಮ-ದಳನೇತ್ರ || ಪರಾ ||೨|| ಗುಣಾ-ರ್ಣವ ಶರಣಾಗತ ಭ| ರಣಾ ನಿರ್ಗುಣಾ | ಶ್ರೀ ಲಕ್ಷ್ಮೀನಾರಾಯಣ ಪ್ರಾಣಾ ಸುತ್ರಾಣ-ದೇವ | ಗಣಾಗ್ರಣಿಯಾನಂದ ಗೋವಿಂದ || ಪರಾ || ೩ ||

|| ರಾಗ: ಮೋಹನ. ಆದಿತಾಳ ||

ಭಕುತ ಸಂಸಾರಿ ಹರಿ ಶಕಟ ಸಂಹಾರಿ | ಸಕಲಾಂತರ್ಯಾತ್ಮಕ ಗಿರಿಧಾರಿ || ಭಕುತ ಸಂಸಾರಿ || ಅನುಪಲ್ಲ || ಅಂತರ್ಬಹಿರ್ವ್ಯಾಪ್ತಾನಂತವತಾರಿ | ಸಂತಜನರ ಮನೆಗೆ ಭ್ರಾಂತಿನಿವಾರಿ || ಭಕುತ ||೧|| ನಿಖಿಲ ಬ್ರಹ್ಮಾದಿ ಸುರನಿಕರ ಕೈವಾರಿ | ಪ್ರಕೃತಿ ನಿಯಾಮಕ ಪ್ರಭು ಕಂಸಾರಿ | || ಭಕುತ || ೨ | ಘನಕೃಪಾಸಾಗರ ಪ್ರಣತಾರ್ತಿಹಾರಿ | ಅನಘಲಕ್ಷ್ಮೀನಾರಾಯಣ ನಿರ್ವಿಕಾರಿ || ಭಕುತ || ೩ ||

|| ರಾಗ: ಭಜನೆ ||

ಅಚ್ಯುತಾನಂತ ಗೋವಿಂದ | ಅಕ್ಷರೋತ್ತಮ ಸದಾನಂದ | ನಿಶ್ಚಯ ಭಕ್ತಿಯಿಂ | ಮೆಚ್ಚಿಸು ಹರಿಯಂ | ನಿಶ್ಚಯ ಪೋಪುದು ಭವಬಂಧ || ಅಚ್ಯು ||೧|| ಆಧಿವ್ಯಾಧಿಹರಣ ಕಾರಣ ಮಧು | ಸೂದನ ಸತ್ಯ | ಸದ್ಗುಣ ವೃಂದ ವೇದಕವ್ಯ ಪ್ರಹ್ಲಾದ ಕ್ಷೇಮದಮ | ಹೋಡಧಿಶಯನ ಮುಕುಂದ || ಅ || ೨ || ಶ್ರೀಬ್ರಹ್ಮಾದಿ ದಿವಿಜಕುಲವಂದಿತ ಶೋಭಿತ ಪದಾರವಿಂದ | ಈ ಭೂಮಿಯೊಳಗೆ ಜನಿಸಿದಕೆ ಸಫಲ ಲಾಭವೆ ಹರಿಕಥಾನಂದಾ || ಅ || ೩ || ಪ್ರಾಣನಿಯಾಮಕ ಸರ್ವತ್ರವ್ಯಾಪ್ತ ಧ್ಯಾನಿಸದಿರು ನೀ ಬೇರೊಂದ | ದೀನವತ್ಸಲ ಸುಮ್ಮಾನದಿ | ಕಾವ ಲಕ್ಷ್ಮೀನಾರಾಯಣ ದಯದಿಂದ || ಅಚ್ಯುತ || ೪ ||

|| ರಾಗ: ಸಮಾಜ್. ಆದಿತಾಳ ||

ಪಾಪನ ಕರವರ ಪರಾತ್ಪರ | ನತ ಸುರನರಕಿನ್ನರ | ಪಾವನ | | ಪಲ್ಲ || ಜೀವಾಂತರ್ಗತ | ಜೀವನಾಮ ರಾಜೀವನಾಭ ಸಂ| ಜೀವ

ಜೀವನದ || ಅ.ಪ. || ಅಷ್ಟದಳ ಹೃದಯ । ಪಟ್ಟಣಾಟಣ ಸ್ವತಂತ್ರ ನಿಯಂತ್ರ । ದುಷ್ಟ ಭವ ಭಯಾ । ರಿಷ್ಟ ವಿಮೋಚನ ಮಂತ್ರ । ಸೃಷ್ಟಿಕ ದೃಷ್ಟ ಪ್ರಭುತ್ವಭೂತ ಸಂ । ವಿಷ್ಟ ಶಿಷ್ಟ ಸಂತುಷ್ಟಿ ಪ್ರದಾಯಕ || ಪಾವನ || || ೧ || ಅಂತರಾತ್ಮ ಪರಮಾತ್ಮ ಪರಮ ಗುಣಧಾಮ ಶ್ರೀ ಸೋಮ । ಚಿಂತನೀಯ ನೈರಂತರ ನಿಗಮಸ್ತೋಮ । ಸಂತಜನದುರಿತ । ಧ್ವಾಂತ ಶಮನ ಶ್ರೀ । ಕಾಹಿತಾ ಚಿಂತ್ಯಾನಂತ ಶುಭಚರಿತ || ಪಾವನ || ೨ || ಅಕ್ಷರ ಬ್ರಹ್ಮವಿ । ಪಕ್ಷರಿಪುಕ್ಷಯ ಭೀಮ ಶ್ರೀರಾಮ । ಪಕ್ಷೀಂದ್ರ ತುರಗ । ಮೋಕ್ಷಾಶ್ರಯ ಶಿವನಾಮ ಕುಕ್ಷಿಸ್ಥಾಖಿಲ ವಿಶ್ವವೀತಭಯ । ಲಕ್ಷ್ಮೀನಾರಾಯಣ ಗುಣಗಣನಿಧಿ || ಪಾವನ || ೩ ||

|| ರಾಗ: ಆನಂದ ಭೈರವಿ. ಆದಿತಾಳ ||

ಬಾ ಬಾ ಬಾ ಹರಿಯೆ । ಮೂಲೋಕದ ದೊರೆಯೆ || ಬಾ ಬಾ ಬಾ || ಪಲ್ಲ || ಸರ್ವೋತ್ತಮ ಸರ್ವಾಂತರ್ಯಾಮಕ । ಸರ್ವಾಧಾರ ಪ್ರವೀರ ಶೂರವರ || ಬಾ || ೧ || ನಿತ್ಯಮುಕ್ತ ಪರಿಪೂರ್ಣ ಗುಣಾರ್ಣವ । ಸತ್ಯ ನಿಯಾಮಕ ಸತ್ಯವಾದರೆ ತ್ವರೆ || ಬಾ || ೨ || ರೂಪತ್ರಯಭವ । ತಾಪಶಮನ ಸ । ದ್ವ್ಯಾಪಕ ಸ್ಥಾಪಕ ಶ್ರೀ ಪುರುಷೋತ್ತಮ || ಬಾ || ೩ || ಭಜಕರ ಭಾಗ್ಯನಿಧಿಯು ನೀನೆಂಬುದು । ನಿಜವಾಗಿರೆ ಶ್ರೀರುಜ ಗಣೇಶಪತಿ || ಬಾ || ೪ || ಶ್ರೀ ಲಕ್ಷ್ಮೀನಾರಾಯಣ ನಿರ್ಗುಣ । ಮೂಲೇಶ ಮುಕುಂದ ಮುನೀಂದ್ರವಂದಿತ || ಬಾ || ೫ ||

|| ರಾಗ: ಆದಿತಾಳ ||

ಸ್ವಾಮಿ । ಪರಾಕು ಮಹಸ್ವಾಮಿ । ಸಜ್ಜನಪ್ರೇಮಿ || ಪಲ್ಲ || ಕ್ಷೀರ ಸಾಗರಶಯನ ನಿವಾಸಾ । ಪಾರಗುಣ ಗುಣಾಶ್ರಯ । ಪಾರಮೇಷ್ಠಿ ಪ್ರಮುಖಾಮರ ಪೂಜಿತ । ಚಾರುಪದಾಬ್ಜದ್ವಯ || (ಚಾಲ್) ಧನುಜಾರಿ ಧನಂಜಯ ಪ್ರಿಯಮದ ವಾರಣಕೃತ ನಿರ್ಭಯ । ನಮ್ಮ ದೂರನು ಲಾಲಿಸು ಚಿನ್ಮಯ । ಜಯ || ಸ್ವಾಮಿ || ೧ || ದುಷ್ಟ ನಿಶಾಚರ । ರಟ್ಟುಳಿ ಘನ ಕಂ । ಗೆಟ್ಟುದು ಸುರಮುನಿಗಣ ಆ ಭೃಷ್ಟರು ಮಾಡುವ । ನಿಷ್ಠುರಕೆ ವೈ । ಗೊಟ್ಟೆವು ಸಂಕರ್ಷಣ || (ಚಾಲ್) ಸಾವಿನ್ನೆಷ್ಟೆಂಬುದು ದುರ್ಗುಣ । ವಶಬಿಟ್ಟೆವು ಸುರಪಟ್ಟಣ । ನಮ್ಮ ಕಷ್ಟವು ಪದಕರ್ಪಣ ಪರಾಯಣ ||

॥ ಸ್ವಾಮಿ ॥ ೨ ॥ ಜೀವ ಪರಮೈಕತ್ವ ಸಾಧಿಸುವ । ಭಾವಶೂನ್ಯ
ದುರ್ವಾದ ॥ ಕೇವಲದುರಿತ [illegible] । ಮೋವಿಲಾಸ ದಿತಿ । ಜಾವಳಿಯಿಂದಹ
ಬಾಧ ॥ (ಚಾಲ್) ಅಮರಾವತಿಗೂರಿಕುಪಾದ । ಕರುಣಾ ವರುಣಾಲಯ
ಶ್ರೀಧ । ನಮ್ಮ ಕಾವುದೆಣಿಸದಪರಾಧವ ಮಾಧವ ॥ ಸ್ವಾಮಿ ॥ ೩ ॥
ಅಂತರಂಗ ಬಹಿರಂಗ ಭೃಷ್ಟಘನು । ಸಂತತಿ ಸಂತತಿ ಭಾರಿ । ಬಲುಭ್ರಾಂತಿ
ಜ್ಞಾನವಿತಾನ ಧುರೀಣ । ಸಂತಾಪಿಪರು ಮುರಾರಿ ॥ (ಚಾಲ್) ನಮ್ಮ
ಸಂತೈಸೈ ಗಿರಿಧಾರಿ । ಶ್ರೀಕಾಂತ ಕೃಪಾರ್ಣವ ಶೌರಿ । ಜಗದಂತ ವಿಹಾರಿ
ನಿರಂತ ಪರಂತಪ ॥ ಸ್ವಾಮಿ ॥ ೪ ॥ ಮಿಥ್ಯಾವಾದ ವಿನೋದ ಫಲಾದಕು ।
ಚಿತ್ರಪ್ರಮತ್ತರ ವೃಂದ । ಪೃಥ್ವಿದೇವಿಗತೀವ ಭಾರ ಪುರು । ಪೋತ್ರಮನೀ
ಕೃಪೆಯಿಂದ ॥ (ಚಾಲ್) ಕೃತಕೃತ್ಯರಗೈ ಗೋವಿಂದ । ಪರಮಾರ್ಥ ಸಚ್ಚಿ
ದಾನಂದ । ಸಂಸ್ತುತ್ಯಾಮರ ಮುನಿ ಸನಂದ ಮುಕುಂದ ॥ ಸ್ವಾಮಿ ॥ ೫ ॥
ಚನ್ನಕೇಶವ ಚರಾಚರಾತ್ಮಕೈ । ತನ್ಮಯರೂಪ ಶ್ರೀರಂಗ । ನಮ್ಮ । ಬಿನ್ನಪ
ಲಾಲಿಸು ಪಾಲಿಸು ತ್ರಿಭುವನ । ವನ್ನ ಸನ್ನುತ ಶುಭಾಂಗ ॥ (ಚಾಲ್)
ಸರ್ವೋನ್ನತ ಮಹಿಮ ತರಂಗ । ದುರಿತಾನ್ವಯ ತಿಮಿರ ಪತಂಗ । ಸುಪ್ರ
ಸನ್ನ ಸದೋದಿತ ವಿಹಂಗತುರಂಗ ॥ ಸ್ವಾಮಿ ॥ ೬ ॥ ನೀಲೇಂದೀವರ
ಶ್ಯಾಮಲ ಕೋಮಲ । ಕಾಲನಿಯಾಮಕ ಪ್ರಾಣ । ನಿನ್ನೋಲಗ ಸೇವಕ
ರಾಳಿಯೂಳಿಗವ । ಕೇಳು ತ್ರಿಲೋಕತ್ರಾಣ ॥ (ಚಾಲ್) ನತಪಾಲ ಪರೇಶ
ಪುರಾಣ । ಶ್ರೀಲೋಲ ವಿಗತ ಪರಿಮಾಣ । ಹೃದಯಾಲಯಮಣಿ ಲಕ್ಷ್ಮೀ
ನಾರಾಯಣ ॥ ಸ್ವಾಮಿ ॥ ೭ ॥

॥ ರಾಗ: ಧನಾಶ್ರಿ ಆದಿತಾಳ ॥

ಪಾಲಿಸು ನಮ್ಮನು ಪರಬ್ರಹ್ಮಶ್ರೀ । ಲೋಲಾನಂತ ಗುಣಾಲಯನೆ ।
ನೀಲಾಭ್ರದಾಭ । ಕಾಲನಿಯಾಮಕ । ಮೂಲೇಶಪುರು । ಷ ಮೂಲೋಕಾ
ಧಿಪ ॥ ಪಾ ॥ ಪಲ್ಲ ॥ ಉತ್ತಮ ಗುಣಗಳು । ಬತ್ತಿಹೋದವ್ಯೆ । ದೈತ್ಯರ
ಗುಣವು ಪ್ರ । ವರ್ತಿಪದು । ಚಿತ್ತಸಾಕ್ಷಿತವ । ಭಕ್ತಿರಥಾವೃತ । ನಿತ್ಯ
ನಿತ್ಯ ಸವಿಸುತ್ತ ಹಿಂಬಾಲಿಸೆ ॥ ಪಾಲಿಸು ॥ ೧ ॥ ಭಾಗವತಜನರ ।
ಯೋಗಕ್ಷೇಮ ಸಂ । ಯೋಗೊದ್ಯೋಗನೀ । ನಾಗಿರಲು । ಕೂಗುಪ
ಸುತರ ಕೂಡೆ ಕೂಡಿಸದೆ । ಭೋಗಿಶಯನ ಭವ । ರೋಗ ಭೇಷಜನೆ ॥
॥ ಪಾಲಿಸು ॥ ೨ ॥ ಪಾವನಕರ ನಾಮಾವಳೀ ವರ್ಣಿಪ । ಸೇವಕಜನರ

ಷಂ । ಭಾವಿಸುವ ಕೇವಲಾನಂದ । ರೀವಿ ಪಾಲಿಸು । ಶ್ರೀ ವಾಸುದೇವ ದೇವಕೀತನಯ ॥ ಪಾಲಿಸು ॥ ೩ ॥ ಬಾಯಿಗೆ ಬಂದ ಬಡಾಯಿ ಪೇಳುತಿಹ । ಮಾಯಿಗಳ ಮತವು! ಶ್ರೀಯರಸ ವಾಯುಮತಕ್ಕನು । ಮಾಯಿಗಳ ಸಂಗ । ಶ್ರೇಯಸ್ಕರ ಷದು । ಪಾಯವ ಬೋಧಿಸೆ ॥ ಪಾಲಿಸು ॥ ೪ ॥ ಶುದ್ಧ ತಮೋಗುಣ । ಬದ್ಧ ದೈತ್ಯ ಪ್ರ । ಸಿದ್ಧರಾಗಿಹರು ಮಧ್ಯಮರು ॥ ಬುದ್ಧಿ ಜ್ಞಾನ ಸಂ । ವೃದ್ಧಿ ಭಕ್ತಿಯಿಂ । ದುದ್ಧರಿಸೈ ಗುರು । ಮಧ್ವ ವಲ್ಲಭನೆ ॥ ಪಾಲಿಸು ॥ ೫ ॥ ಕೇಶವಾಚ್ಯುತ ಪರೇಶ ಹೃದ್ಗುಹ ನಿ । ವಾಸ ವಾಸ ವಾದ್ಯಮರನುತ ॥ ಶ್ರೀಶ ಶ್ರೀ ವೆಂಕ । ಟೇಶ ಭಕ್ತಜನ । ರಾಶಯಸ್ಥಿತ ದಿ । ನೇಶ ಶತಪ್ರಭ ॥ ಪಾಲಿಸು ॥ ೬ ॥ ಮಂಗಲ ಜಗದೋ । ತ್ತುಂಗರಂಗ ಮಾ । ತಂಗ ವರದ ನೀಲಾಂಗ ನಮೋ ॥ ಅಂಗಜಪಿತ ಲ । ಕ್ಷ್ಮೀನಾರಾಯಣ । ಸಂಗೀತಪ್ರಿಯ ವಿ । ಹಂಗ ತುರಂಗನೆ ॥ ಪಾಲಿಸು ॥ ೭ ॥

॥ ರಾಗ: ಆದಿತಾಳ ॥

ನಿನ್ನೊರತು ಪೊರೆವರಿಲ್ಲ ಹರಿ ಮುರಾರಿ । ನಿನ್ನೊರತು ॥ ಪಲ್ಲ ॥ ಪೂರ್ಣಾರ್ತಪೂರ್ಣ ಕ್ಷೀ । ರಾರ್ಣವ ಶಯನ ವ । ರೇಣ್ಯ ಸ್ವತಂತ್ರ ವಿಹಾರಿ ॥ ನಿನ್ನೊ ॥ ೧ ॥ ಜೀವ ನಿಚಯಕೃತ । ಸೇವೆಯ ಕೈಕೊಂಡು । ಪಾವನಗೈವೆ ಖರಾರಿ । ನಿನ್ನೊ ॥ ೨ ॥ ತಾಪತ್ರಯಹರ ಗೋ । ಪಾಲ ವಿಠಲ । ಆಪನ್ನಭಯ ನಿವಾರಿ ॥ ನಿನ್ನೊ ॥ ೩ ॥ ಪ್ರಾಣನಾಥ ಸರ್ವ । ಪ್ರಾಣನಿಯಾಮಕ । ಪ್ರಾಣದಾನಂತವತಾರಿ ॥ ನಿನ್ನೊ ॥ ೪ ॥ ಲಕ್ಷ್ಮೀನಾರಾಯಣ ಬ್ರಹ್ಮಾದಿ ವಿ । ಲಕ್ಷಣ ರಕ್ಷಣಕಾರಿ ॥ ನಿನ್ನೊ ॥ ೫ ॥

॥ ರಾಗ: ಭಜನ. ಆದಿತಾಳ ॥

ಸಾರ ಸಾರ ಸಾರ ಹರಿಯಾ । ಪಾರ ಮಹಿಮಾ ನಾಮ ॥ ಘೋರ ಸಂಸಾರಾಬ್ಧಿ ಶೀಘ್ರೋ । ತ್ತಾರ ನೌಕಧಾಮ ॥ ಸಾ ॥ ೧ ॥ ವಿಧಿ ಭವಾದ್ಯಮರೌಘ ಧ್ಯಾನಾ । ಸ್ಪದ ಕಲ್ಪದ್ರುಮ । ಪದನತಾಖಿಲ ಭಕ್ತ ಭವಭಯ । ಕುಧರ ವಜ್ರೋಪಮ ॥ ಸಾ ॥ ೨ ॥ ಭಕ್ತಿಜ್ಞಾನ ವೈರಾಗ್ಯಭಾಗ್ಯ ನಿ । ವೃತ್ತಿ ಸುಖನಿಸ್ಸೀಮ ॥ ಕರ್ತ ಲಕ್ಷ್ಮೀನಾರಾಯಣನ । ಭೃತ್ಯವರ್ಗಕ್ಷೇಮ ॥ ೩ ॥

|| ರಾಗ: ಭಜನ ||

ಹರಿಧ್ಯಾನವೆ ಗಂಗಾಸ್ನಾನ | ವಿಷಯಾನಃಭವ ಜಯವೆ ಮೌನ || || ಹರಿ || ಪ್ರಾಣೇಶನೆ ಸರ್ವೋತ್ತಮ ವೇದ ಪು | ರಾಣ ಪ್ರಮಾಣವೆ ಜ್ಞಾನ || ಹರಿಧ್ಯಾನ || ೧ || ಮತ್ತರ ಸಂಗ ಪ್ರ | ವೃತ್ತಿಯೊಳಿರದೆ ನಿ | ವೃತ್ತಿಯೊಳಿರುವದೆ ಮಾನ || ಸತ್ಯಾತ್ಮನ ರೂಪದೊಳಃ ಭೇದ ರಾ | ಹಿತ್ಯವೆ ಸರ್ವಸಮಾನ || ಹರಿಧ್ಯಾನ || ೨ || ಕರ್ತ ಲಕ್ಷ್ಮೀನಾರಾಯಣ ಪಾದ | ಭಕ್ತಿವಿರಹಿತನೆ ಹೀನಚಿತ್ತಜೋದ್ಭವ ಪರಾತ್ಪರ ತ್ರಿಜಗವು | ಪ್ರತ್ಯ ಗಾತ್ಮನಾಧೀನ || ಹರಿಧ್ಯಾನ || ೩ ||

|| ರಾಗ: ಧನಾಶಿರಿ. ರೂಪಕತಾಳ ||

ವ್ಯಾಸ ರಘುಪತಿ | ದಾಸೋಹಂ ದಾಶರಥಿ | ವ್ಯಾಸ ರಘುಪತಿ | ಶ್ರೀಶಾ ಸಂಸ್ಕೃತಿ | ಕ್ಲೇಶ ದುರ್ಗತಿ ನಾಶ ಸತ್ಯವೃತಿ || ವ್ಯಾ ||೧|| ಪ್ರತ್ಯ ಗಾತ್ಮ ಪಾವನ ಸುಚರಿತ್ರ ಶುದ್ಧ ಮಾರುತಿ | ಮರ್ತ್ಯಲೀಲಾಕೃತಿ | ಹರ್ತಾ ಭಕ್ತಾರ್ತಿ | ಮುಕ್ತಾನಾಂ ಪರಮಾಗತಿ || ವ್ಯಾ || ೨ || ಸುಕೃತೀಂದ್ರ ಯತೀಂದ್ರ ಪೂಜಿತ ಸುಖನಿಧಿ ಜಿತಸಮಿತಿ | ಪ್ರಕೃತೇಃ ನಿಯಂತ್ರಿ | ಪರ ತರಜ್ಯೋತಿ ಪರಮಾನಂದ ವಿಭೂತಿ || ವ್ಯಾ || ೩ || ಕಾಶಿಮಠಸ್ಥ ಯತಿ ಹೃದ | ಯಾಕಾಶಯಕೃತವಸತಿ | ಅಸುರತತಿ | ನಾಶೈಕ ಧೃತಿ | ಭಾಸಾರ್ಕ ಕೋಟಿದ್ಯುತಿ || ವ್ಯಾ || ೪ || ಲಕ್ಷ್ಮೀನಾರಾಯಣ ಸುವಿ | ಲಕ್ಷಣ ಪರಮಾರ್ಥಿ | ಸುಕ್ಷೇಮದಾತ್ರಿ | ಯಕ್ಷೀಣ ಶಕ್ತಿಸಾಕ್ಷಿ ಯಃಚ್ಛಿದ್ರ ಮತಿ || ವ್ಯಾ || ೫ ||

|| ರಾಗ: ಆನಂದ ಭೈರವಿ. ಅಷ್ಟತಾಳ ||

ಅನ್ಯರಿಲ್ಲ ಗತಿ | ಅಚ್ಯುತಾನಂತ ಶ್ರೀಪತಿ | ಅಜಪಿತ ಮಹಾಮತಿ | ಅನ್ಯರಿಲ್ಲ ಗತಿ || ಸತ್ಯ ಜ್ಞಾನಾನಂತಗುಣಸಿಂಧು | ಭಾಗವತಜನ ಬಂಧು | ರಕ್ಷಿಸಿಂಧು | ಪ್ರತ್ಯಗಾತ್ಮ ಸು | ಹೃತ್ತಮ ಜರಾ | ಮೃತ್ಯುರಹಿತನೆ ಚಿತ್ರ ಸಾಕ್ಷಿಯೆ || ೧ || ವಾಸುದೇವ ದಿನೇಶ ಕೋಟಿಪ್ರಭಾ | ಪೂಜಿತವಿಬುಧ ಮೌನಿಸಭ ಪದ್ಮನಾಭ | ದಾಸಜನ ಹೃದ | ಯಾಶಯಸ್ಥಿತ | ದೋಷ ಗಂಧವಿದೂರ ಶ್ರೀವರ || ಅನ್ಯ || ೨ || ಸಕಲ ಜಗದಾಧಾರ ಮೂರು ತಿಯೆ | ವಿಜಯರಥ ಸಾರಥಿಯೇ ಹರಿಯೇ | ದೊರೆಯೆ ಶಕಟಮರ್ಧನ ಶಾರ್ಙಧರ | ಶ್ರೀ ಲಕುಮಿನಾರಾಯಣ ನಮೋಸ್ತುತೆ || ಅನ್ಯ || ೫ ||

|| ರಾಗ: ಧನಾಶಿರಿ. ಆದಿತಾಳ ||

ನಿನ್ನ ದಾಸಾನುದಾಸನು ನಾ ಸುಪ್ರ । ಸನ್ನಾತ್ಮನಿಗಮಸನ್ನುತನೆ । ಯನ್ನಾನಂತಪರಾಧಗಳ ಕ್ಷಮಿಸು । ಪೂರ್ಣೇಂದುವಕ್ತ್ರ ಪನ್ನಂಗಶಯನನೆ || ನಿ || ಸಂತಾಪಘ್ನಾ । ನಂತಮಹಿಮ ಜಗದಂತರ್ಯಾಮಿ । ಪರಂತಪನೆ । ಮಂತ್ರಾತ್ಮರಮಾ । ಕಾಂತ ಕವಿಮಲ । ಧ್ವಾಂತಧ್ವಂಸನಾ । ಚಿಂತ್ಯ ಸ್ವತಂತ್ರನೆ || ನಿ || ೧ || ಬಟ್ಟೆಯೊಳ್ಕಂಡವ । ಕಟ್ಟೆ ಸ್ವಗೃಹದಿಬ । ಚ್ಚಿಟ್ಟಂತೆ ಕಾರ್ಯದುಷ್ಕರದು । ಗುಟ್ಟರಿಯದೆ ಪರ । ಮೇಷ್ಠಿ ಜನಕ ನಿನ್ನ । ಭ್ರಷ್ಟರಾಚರಣೆಗೆಷ್ಟೆಂಬುವದೈ || ನಿ || ೨ || ಯೇಳೆರಡು ಲೋಕ । ಪಾಲಕರು ಸರ್ವ । ರೂಳಿಗದ ಜನರು ಮೂಲೇಶ । ಶ್ರೀ ಲಕ್ಷ್ಮೀನಾರಾಯಣ ನಿರ್ಗುಣ । ಕಾಲನಿಯಾಮಕ ದೈತ್ಯಾಂತಕ ಜಯ || ನಿ || ೩ ||

|| ರಾಗ: ತೋಡಿ. ಅಷ್ಟತಾಳ ||

ಯೇನನೆಂತೆನ್ನಲಿ ಯೆಂಬನನುತಾಪ । ನೀನಾದ್ದರಿಂದೆಂಬೆ ಗೈಯದೆ ಲೋಪ||ಯೆ|| ಕಂಡೆದುರಾದ ಕಂದರ್ಪ ಲಾವಣ್ಯ । ಸನ್ನುತ ಸಕಲ ಲೋಕೈಕ ಪರಣ್ಯಾ । ಬಂಣಿಸಲರಿದು ಸರ್ವೋನ್ನತಮಹಿಮ । ಪುಣ್ಯಪುರುಷ ಸುಪ್ರಸಂನ ಕೇಳಮ್ಮ || ಯೇ || ೧ || ಕಂಡಾವರೆಯಂತೆ । ಚಂದುಳ್ಳ ಚರಣ । ಸೌಂದರ್ಯಸಾರ ಪೀತಾಂಬರಾವರಣ । ವಂದನೀಯ ಪೂರ್ಣ । ನಂದ ಮುಕುಂದ । ಸಂದೇಹವಿಲ್ಲ । ತೋರಿದನು ಗೋವಿಂದ || ಯೇ || ೨ || ಶಂಕ ಚಕ್ರ ಗಧಾ । ಪಂಕಜಪಾಣಿ । ಶಂಕರನುತ ಶ್ರೀವ । ತ್ಸಾಂಕಿತ ಜನನೀ । ಬಿಂಕದ ಕೌಸುಭಾ । ಲಂಕೃತಗ್ರೀವ । ವೆಂಕಟೇಶ ನಿಷ್ಕ । ಳಂಕ ಕೇಳವ್ವ || ೩ || ಚಂದ್ರಶತಾನನ ಕುಂದಸುಹಾಸ । ಇಂದಿರಹೃದಯಾನಂದಪರೇಶ । ಸುಂದರ ನಳಿನ ದಳಾಯತನಯನ । ಮಂದರಧಾರ ದರಾಥರ ಶಯನ || ಯೆ || ೪ || ಲಕ್ಷ್ಮೀನಾರಾಯಣ ಸುಕ್ಷೇಮಧಾಮ । ಅಕ್ಷರಾರ್ಚಿತ ನೀಲ ನೀರದಶ್ಯಾಮ । ಪಕ್ಷೀಂದ್ರವಾಹನ ಪಾವನ ಚರಿತ । ಸಾಕ್ಷಿರೂಪ ಸಚ್ಚಿದಾನಂದಭರಿತ || ಯೇನನೆಂತೆನ್ನಲಿ || ೫ ||

|| ರಾಗ: ಆನಂದ ಭೈರವಿ. ಆದಿತಾಳ ||

ರಕ್ಷಿಸು ಶ್ರೀಮದನಂತಶಯನ ಶ್ರೀ । ಲಕ್ಷ್ಮೀಕರ ಸಂಸೇವಿತ ಚರಣ । ಅಕ್ಷರ ಬ್ರಹ್ಮ ಬಾಳೇಕ್ಷಣ ವಂದಿತ । ಕುಕ್ಷಿಸ್ಥಾಖಿಲಲೋಕ ನಿತ್ಲೋಕ ||

॥ ರಕ್ಷಿಸು ॥ ಜಂಭಾರಿ ಪ್ರಮುಖಾಮರ ಸೇವಿತ ಜನಿ ಮೃತಿ ಭಯ ದೂರ । ಅಂಬುಧಿಶಾಯಿ ಪೀ । ತಾಂಬರಧಾರಿ ವಿ । ಶ್ವಂಭರ ಪೂರ್ಣಾನಂದ ಮುಕುಂದ ॥ ರಕ್ಷಿ ॥ ೧ ॥ ಪಾವನ ಗಂಗಾದೇವಿ ಜನಿತ ಪಾದ । ಗೋವರ್ಧನಧಾರ । ಶ್ರೀವನಿತಾಸ್ಯ ರಾ ಜೀವ ರವಿಕಿರಣ । ಸೇವಕಜನ ಕೇಶವ । ೨ ॥ ನಾಭಿಕಮಲ ಸ್ಥಿತ ಚತುರ್ಮುಖ । ನಂದಿದ ತ್ರೈಲೋಕ್ಯ ಕ್ಷೋಭಿತ ಧನುಜಾರಣ್ಯ ಹುತಾಶನ । ಭೂಭಾಗೀರಥಿ ಜನಕ ವಿಜಯ ಸಖ ॥ ೩ ॥ ಸರ್ವನಿಯಾಮಕ ಸರ್ವಾಂತರಾತ್ಮಕ । ಸರ್ವೇಷ್ಟಾರ್ಥ ಪ್ರದ । ಪೂರ್ವಾಮರ ಹರಗಿರ್ವಾಣಾರ್ಚಿತ ದುರ್ವಾರಾವಿತ ದುರಿತ ನಿದೂರ್ಷ ॥ ೪ ॥ ಪರಮನಿರಂಜನ ಪ್ರಣತಾರ್ತಿ ಭಂಜನ ಸ್ಥಿರಚರ ಪರಿಪೂರ್ಣ । ಮುರಮುಷ್ಟಿಕ ಹರ ಮುನಿ ಮನೋಶ್ರೀಕರ । ವರ ಲಕ್ಷ್ಮೀ ನಾರಾಯಣನನುದಿನ ॥ ೫ ॥

॥ ರಾಗ: ಆದಿತಾಳ ॥

ಶ್ಯಾಮಾ ಘನ ಸುಂದರ ಘನ ಶ್ಯಾಮಾ ॥ ಪಲ್ಲ ॥ ಗುಂಜಾಮಣಿ ಗಣ ಭೂಷಣ ಸಾದನಿ । ರಂಜನಜನಿಮೃತಿಹನ । ಸಂಜೀವನ ಕೋರ ಮಂಜಿಯಾದ ಮೃ । ತ್ಯುಂಜಯ ಕೃತ ಮೋಹನ । ಯದು ರಂಜನ ನತ ಮುನಿಜನ । ಖಲಭಂಜನ ಭವಮೋಚನ । ನವ ಕಂಜದಳಸುಲೋಚನ ಜನಾರ್ಧನ ॥ ೧ ॥ ವೃದ್ಧವಧೂ ಮಧುಸೂದನ ಸಾದವಿ । ಶುದ್ಧಾತ್ಮರ ಮಾಲೋಲಾ । ಛಿದ್ರ ಕಂಚುಕಮಟೇರಾಂಬರಮನಿ । ರುದ್ಧನು ತಾಳ್ದ ಸುಲೀಲಾ । ಅವಿರುದ್ಧ ಗುಣಾಲವಾಲ । ಸಂಸಿದ್ಧ ರೂಪ ಮನಮಾಲ । ಗೋವರ್ಧನೋದ್ಧರಣ ಬಾಲಗೋಪಾಲ ॥ ಶ್ಯಾ ॥ ೨ ॥ ಕೀಲಾಲಜಭವ ಬಾಲಕನಾದನು । ಕೋಲಾದನು ಶಂಕರ । ಶ್ರೀ ಲಕ್ಷ್ಮೀನಾರಾಯಣ ನಿರ್ಗುಣ । ನೀಲಾಕೃಪಾಕರ । ಕಮಲಾಲಯಹೃನ್ಮಂದಿರ । ಸುತಮಾಲ ನೀಲ ಭಾಸುರ । ಶುಂಡಾಲ ಪಾಲಾಹಿ ಶೈಲಾಧೀಶ್ವರ ॥ ೩ ॥

॥ ರಾಗ: ಕಹಸ್. ಅಷ್ಟತಾಳ ॥

ಇಂಥ ಜನಗಳೀಗೆ । ಯಂಥಾದ್ದು ಹರಿಕಥೆ । ಕುಂತಿಮಕ್ಕಳಿಗ್ಯಾತು ಕಾಂತಾರವಾಸ ॥ ಇಂಥ ॥ ಪಲ್ಲ ॥ ಸ್ವಂತ ಧರ್ಮವ ಬಿಟ್ಟು । ಅಂತ್ಯನ್ನ

[ಹೊದಿಕೆಯ 2ನೇ ಪುಟಕ್ಕೆ ಮುಂದುವರಿದಿದೆ]

Edited, Printed & Published by K. V. Shenoy
at The Prabhat Printers Ltd., Mangalore.